# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 812
ಸದಸ್ಯರ ಹೆಸರು : ಶ್ರೀ. ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 17.12.2018
ಉತ್ತರಿಸುವ ಸಚಿವರು : ಪಶು ಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಎಷ್ಟು ಪಶುಆಸ್ಪತ್ರೆಗಳಿವೆ; | ರಾಜ್ಯದಲ್ಲಿ ಒಟ್ಟು 4212 ಪಶುವೈದ್ಯ ಆಸ್ಪತ್ರೆಗಳಿರುತ್ತವೆ. (176 ಸಂಚಾರಿ ಪಶು ಚಿಕಿತ್ಸಾಲಯಗಳು ಸೇರಿ ) |
| ಆ) | ಇದರಲ್ಲಿ ಸ್ವಂತ ಕಟ್ಟಡಗಳಿರುವ ಆಸ್ಪತ್ರೆಗಳ ಸಂಖ್ಯೆ ಎಷ್ಟು; ಮತ್ತು ಬಾಡಿಗೆ ಕಟ್ಟಡಗಳಲ್ಲಿರುವ ಆಸ್ಪತ್ರೆಗಳ ಸಂಖ್ಯೆ ಎಷ್ಟು; | 3813 ಪಶುವೈದ್ಯ ಆಸ್ಪತ್ರೆಗಳಿಗೆ ಇಲಾಖೆಯ ಸ್ವಂತ ಕಟ್ಟಡವಿರುತ್ತದೆ. 223 ಸಂಸ್ಥೆಗಳು ಗ್ರಾಮ ಪಂಚಾಯಿತಿ ಮತ್ತು ಇತರರು ನೀಡಿದ ಕಟ್ಟಡಗಳಲ್ಲಿ ಬಾಡಿಗೆ ರಹಿತವಾಗಿ ಕಾರ್ಯನಿರ್ವಹಿಸುತ್ತಿರುತ್ತವೆ. |
| ಇ) | ಸ್ವಂತ ಕಟ್ಟಡ ಇಲ್ಲದ ಆಸ್ಪತ್ರೆಗಳಿಗೆ ಸ್ವಂತ ಕಟ್ಟಡ ನಿರ್ಮಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | 2017-18ನೇ ಸಾಲಿನಲ್ಲಿ ಆರ್.ಐ.ಡಿ.ಎಫ್. ಯೋಜನೆಯಡಿ ಇಲಾಖೆಯ 108 ಪಶುವೈದ್ಯ ಸಂಸ್ಥೆಗಳಿಗೆ ಕಟ್ಟಡ ನಿರ್ಮಾಣಕ್ಕೆ ಮಂಜೂರಾತಿ ನೀಡಲಾಗಿದ್ದು, ನಿರ್ಮಾಣ ಪ್ರಕ್ರಿಯೆಯು ಆರಂಭವಾಗಿರುತ್ತದೆ.<br><br>2018-19 ರ ಸಾಲಿಗೆ ರೂ. 50.00 ಕೋಟಿ ಅನುದಾನದಲ್ಲಿ 108 ಕಟ್ಟಡಗಳ ನಿರ್ಮಾಣಕ್ಕೆ ನಬಾರ್ಡ ಸಂಸ್ಥೆಗೆ ಅನುಮೋದನೆಗೆ ಸಲ್ಲಿಸಿದೆ, ಮಂಜೂರಾತಿ ನಿರೀಕ್ಷಿಸಲಾಗಿದೆ.<br><br>ಇದೇ ರೀತಿ ಪ್ರತಿ ವರ್ಷ ಕಟ್ಟಡಗಳು ಇಲ್ಲದಿರುವ ಸಂಸ್ಥೆಗಳಿಗೆ ಕಟ್ಟಡಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು. |
| ಈ) | ವಿಶೇಷವಾಗಿ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಕೊಪ್ಪ ಪಶು ಆಸ್ಪತ್ರೆ ಕಟ್ಟಡ ನಿರ್ಮಾಣಕ್ಕೆ ಮಂಜೂರಾಗಿರುವ ಹಣ ಎಷ್ಟು; | ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಕೊಪ್ಪ ಪಶುಆಸ್ಪತ್ರೆ ಕಟ್ಟಡ ನಿರ್ಮಾಣಕ್ಕೆ ಆರ್.ಐ.ಡಿ.ಎಫ್ ಯೋಜನೆಯಡಿ ಮಂಜೂರಾಗಿರುವ ಹಣ ರೂ.31.43 ಲಕ್ಷ |
| ಉ) | ಈ ಕಾಮಗಾರಿ ಯಾವಾಗ ಪ್ರಾರಂಭವಾಗುತ್ತದೆ. ಯಾವ ಕಾಲ ಮಿತಿಯಲ್ಲಿ ಮುಕ್ತಾಯವಾಗುತ್ತದೆ. | ಈ ಕಾಮಗಾರಿಯು ದಿನಾಂಕ: 13.11.2017 ರಿಂದ ಪ್ರಾರಂಭವಾಗಿ ದಿನಾಂಕ:25.09.2018 ಕ್ಕೆ ಪೂರ್ಣಗೊಂಡಿದೆ. |

**ಸಂ: ಪಸಂಮೀ 148 ಪಸಸೇ 2018**

(ವೆಂಕಟರಾವ್ ನಾಡಗೌಡ)
ಪಶುಸಂಗೋಪನೆ ಹಾಗೂ ಮೀನುಗಾರಿಕೆ ಸಚಿವರು